ಡಾ|| ಶ್ರೀನಿವಾಸ ಹಾವನೂರ*

# ಪರ್ಶಿಯಾದ ರಾಯಭಾರಿ ಹಾಗೂ ದಿವಾನ್ ಪೂರ್ಣಯ್ಯ

ಕ್ರಿ. ಶ. ೧೮೦೩ ಮೈಸೂರು ಸಂಸ್ಥಾನದ ಆಡಳಿತವನ್ನು ಬ್ರಿಟಿಷರು ವಹಿಸಿಕೊಂಡು ಮೂರೇ ವರ್ಷಗಳು ಸಂದಿದ್ದವು. ಮೈಸೂರಿನಲ್ಲಿ ಪೂರ್ಣಯ್ಯನವರು ದಿವಾನರಾಗಿಯೂ ಬ್ಯಾರಿ ಕ್ಲೋಸ್ ಅವರು ರೆಸಿಡೆಂಟರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಕಲ್ಕತ್ತೆಯಲ್ಲಿ ಲಾರ್ಡ್ ಮಾರ್ನಿಂಗ್‌ಟನ್ ಅವರು ಗವರ್ನರ್ ಜನರಲ್ ಆಗಿದ್ದರು. ಇವರೇ ಈ ಕುತೂಹಲ ಘಟನಾವಳಿಯ ಪಾತ್ರಧಾರಿಗಳು.

ಆ ವರ್ಷ ಪರ್ಶಿಯಾದ ಅಂಕಿತ ರಾಯಭಾರಿಯಾಗಿದ್ದ ಹಾಜಿ ದೌಲತ್ ಖಾನ್ ಎಂಬಾತ ಕಲ್ಕತ್ತೆಯ ಗವರ್ನರ್ ಜನರಲ್ಲರಿಗೆ ತನ್ನ ಪರಿಚಯ ಪತ್ರಗಳನ್ನು ಸಲ್ಲಿಸುವ ಸಲುವಾಗಿ ಹೊರಟು, ಮೊದಲು ಮುಂಬೈಗೆ ಬಂದ. ಮುಂಬೈನಲ್ಲಿ ಆತನಿಗೆ ಗೌರವಾದರ ಸ್ವಾಗತ ದೊರೆಯಿತು. ಅದೇ ಸಮಯಕ್ಕೆ ಆತನಿಗೆ, ಇತ್ತೀಚಿನವರೆಗೆ ಟೀಪೂ ಆಳಿದ ಖ್ಯಾತ ಶ್ರೀರಂಗಪಟ್ಟಣ ನೋಡುವ ಮನಸ್ಸಾಯಿತು.

ಆತ ಶ್ರೀರಂಗಪಟ್ಟಕ್ಕೇನೋ ಬಂದ. ಆದರೆ ಪ್ರಮಾದವಶಾತ್ ಇಲ್ಲಿಗೆ ಬಂದೊಡನೆ ಕೊನೆಯುಸಿರೆಳೆದ, ಹೇಗಾಯಿತೀ ಘಟನೆ ? ಆರೋಗ್ಯವಂತ ವ್ಯಕ್ತಿ ಇದ್ದಕ್ಕಿದ್ದಂತೆ ಸಾಯುವುದೆಂದರೇನು ? ಅಥವಾ ಯಾರಾದರೂ ಆತನನ್ನು ಕೊಂದರೇ ? ಇವಕ್ಕೆ ಉತ್ತರವಿಲ್ಲ. ತನ್ನ ರಾಯಭಾರತ್ವದ ಉದ್ದೇಶಗಳನ್ನು ಬಲಪಡಿಸುವ ಸಲುವಾಗಿ ತನ್ನಲ್ಲಿಗೆ ಹೊರಟಿದ್ದ ವ್ಯಕ್ತಿ ಹಠಾತ್ ಇಲ್ಲವಾದರೆ, ಕಲ್ಕತ್ತೆಯ ಗವರ್ನರ್ ಜನರಲ್ ಏನಂದಾರು ?

ಈ ಸಾವಿನಿಂದ ನಿಜವಾಗಿಯೂ ಚಿಂತೆಗೀಡಾದವರು ಪೂರ್ಣಯ್ಯನವರು. ತಮ್ಮ ಬ್ರಿಟಿಷ್ ಮೇಲಧಿಕಾರಿಗಳಿಗೆ, ದೌಲತ್‌ಖಾನನದು ಸಾಮಾನ್ಯ ಸಾವು ಎಂದು ಮನವರಿಕೆಮಾಡಿಕೊಡುವುದು ಅವರ ಆದ್ಯ ಕರ್ತವ್ಯವಾಯಿತು. ತಕ್ಷಣ ಅವರು ಸ್ಥಳೀಯ ರೆಸಿಡೆಂಟರನ್ನು ಓಲೈಸಿ ಅವರಿಂದಲೂ ಪಕ್ಕದ ತಿರುವಾಂಕೂರಿನ ರಾಜ ಮತ್ತು ರೆಸಿಡೆಂಟರಿಂದಲೂ ಪರ್ಶಿಯಾದ ರಾಯಭಾರಿಯ ಸಾವು ಸಾಮಾನ್ಯ ಸಾವೆಂಬಂತೆ ಒಂದು ರೀತಿಯ ಟಿಪ್ಪಣಿ ಪಡೆದರು. ಮುಂದೆ ಈ ಬಗ್ಗೆ ಗವರ್ನರ್ ಜನರಲ್ಲರಿಗೆ ಅಧಿಕೃತ ಪ್ರಕಟಣೆಯನ್ನು ಕಳುಹಿಸಲಾಯಿತು. ಘಟಣೆಯ ಬಗ್ಗೆ ಅವರು ತಮ್ಮ ಅಸಮಾಧಾನ ವ್ಯಕ್ತ ಪಡಿಸಿದರೆಂದು ನಂತರ ತಿಳಿದು ಬಂದಿತು.

ಅದು ನಿಜವಾದ ಅಸಮಾಧಾನ ಮಾತ್ರವೇ ಆದರೂ, ಮದರಾಸ್ ಗವರ್ನರ್ ಮೂಲಕ ಮೈಸೂರು ಸೇರುವ ವೇಳೆಗೆ, ಗವರ್ನರ್ ಜನರಲ್ಲರು ಘಟನೆಯ ಬಗ್ಗೆ

* ಶುಭತಾರಾ, ಚಾಫೇಕರ್ ಮಾರ್ಗ, ಪುಣೆ ೪೧೧ ೦೦೪

ಕುಪಿತರಾದರು ಎಂದು ವರದಿಯಾಯಿತು. ಇದರ ಶಮನಕ್ಕಾಗಿ ಏನಾದರೂ ಮಾಡಲೇಬೇಕಿತ್ತು! ರಾಜ್ಯಾದ್ಯಂತ ಈ ಸಾವಿನ ಶೋಕವನ್ನು 'ಆಚರಿಸಲು' ಪೂರ್ಣಯ್ಯನವರು ನಿರ್ಧರಿಸಿದರು.

ದೆಹಲಿಯ ರಾಷ್ಟ್ರೀಯ ಪತ್ರಾಗಾರದಲ್ಲಿ ಈ ಬಗ್ಗೆ ಲಭ್ಯವಿರುವ ಹಲವಾರು ದಾಖಲೆಗಳಲ್ಲಿ ಒಂದು ದಾಖಲೆ ಈ ವಿವರ ನೀಡುತ್ತದೆ: "ಮುಹಮ್ಮದೀಯ ಧಾರ್ಮಿಕ ವಿಧಿಗಳನ್ನು ನಡೆಸಲು ಈ ಕೋಮಿನ ಧಾರ್ಮಿಕ ಹಾಗೂ ಸಹಾಯ ಬೇಕಾಗಿರುವ ಮಂದಿಗೆ ಈ ಸರಕಾರ (ಮೈಸೂರು ಸರಕಾರ) ಆಹಾರ ಒದಗಿಸಬೇಕು. ಈ ವಿಧಿಗಳು ಈಗಾಗಲೇ ಪ್ರಾರಂಭವಾಗಿವೆ."

ಇದೆಲ್ಲ ಸರಿ. ಆದರೆ ಒಬ್ಬ ಸಾಮಾನ್ಯ, ಅಷ್ಟೇನೂ ಸುಪರಿಚಿತನಾಗದ ವ್ಯಕ್ತಿಯ ಬಗ್ಗೆ ಇದೆಲ್ಲ ಬೇಕಿತ್ತೇ? ಸದರಿ ದಾಖಲೆಯ ಕೊನೆಗೆ ನಿಜವಾದ ಕಾರಣ ಸುಸ್ಪಷ್ಟವಾಗಿತ್ತು:

"ದೇವರ ದಯೆಯಿಂದ ಘನತೆವೆತ್ತ ಖಾವಂದರ ಕೋಪ ಬೇಗ ಸಂಪೂರ್ಣವಾಗಿ ತೊಲಗುತ್ತದೆ."

"ಘನತೆವೆತ್ತ ಖಾವಂದರಾದ ಗವರ್ನರ್ ಜನರಲ್ಲರ ಮನೋಕ್ಲೇಶ ಚದುರಿಸಲು" ಇದಿಷ್ಟೆ ಸಾಲದೆಂದು ಅತಿ ಜಾಗರೂಕರಾದ ಪೂರ್ಣಯ್ಯನವರಿಗೆ ಅನ್ನಿಸಿತು. ಶೋಕಾಚರಣೆ ಹಿಂದೂಗಳ ದೇವಸ್ಥಾನಗಳಲ್ಲಿಯೂ ನಡೆಸುವುದು ಅವಶ್ಯವಾಯಿತು! ಮೈಸೂರು ಹಾಗೂ ಶ್ರೀರಂಗಪಟ್ಟಣದ ಪ್ರಾಂತ್ಯಗಳ ನಿವಾಸಿಗಳಾದ ಒಂದು ಲಕ್ಷ ಇಪ್ಪತ್ತು ಸಾವಿರ ಬ್ರಾಹ್ಮಣರಿಗೆ ಧಾರ್ಮಿಕ ವಿಧಿ ಸಾಮಗ್ರಿಗಳನ್ನು ಹಂಚಲು ನಿರ್ಧರಿಸಲಾಗಿದೆ. ಈ ಬ್ರಾಹ್ಮಣರು ಈ ಸಂದರ್ಭದಲ್ಲಿ ತಮ್ಮ ದೇವಾಲಯಗಳಲ್ಲಿ ದೀಪ ಬೆಳಗಿಸಿ ಧಾರ್ಮಿಕ ವಿಧಿಗಳನ್ನು ನಿರ್ವಹಿಸತಕ್ಕದ್ದು."

ಶೋಕಾಚರಣೆಯ ಕೊನೆಯಲ್ಲಿ ಅಕ್ಟೋಬರ್ ೧೮೦೨ ರಲ್ಲಿ ಒಂದು ವಿಶೇಷ ದರ್ಬಾರನ್ನು ಏರ್ಪಡಿಸಲಾಗಿತ್ತು. ಅಂದು ವಿದ್ವತ್ಪೂರ್ಣ ಭಾಷಣಗಳನ್ನು ಏರ್ಪಡಿಸಿದ್ದೇ ಅಲ್ಲದೆ, ಗವರ್ನರ್‌ಜನರಲ್ಲರ ಪ್ರಕಟಣೆಯನ್ನು ರಾಜೋಚಿತವಾಗಿ ಓದಲಾಯಿತು. ಇದನ್ನೆಲ್ಲ ಅವಲೋಕಿಸಿದಾಗ, ಪೂರ್ಣಯ್ಯನವರೇ ಅಲ್ಲ, ಟೀಪೂ ಸುಲ್ತಾನನ ವಿರೋಚಿತ ಯುದ್ಧದ ನಂತರವೂ ಇಡೀ ಮೈಸೂರು ರಾಜ್ಯ ಬ್ರಿಟಿಷರಿಗೆ ಎಷ್ಟರ ಮಟ್ಟಿಗೆ ಅಡಿಯಾಳಾಗಿತ್ತೆಂಬುದರ ಬಗ್ಗೆ ಆಚ್ಚರಿ ಮೂಡುತ್ತದೆ. ಈ ಬಗ್ಗೆ ಮತ್ತಷ್ಟು ನಿದರ್ಶನ ಇಲ್ಲಿದೆ.

"ದೇವರಿಗೆ ಸಂದಷ್ಟೇ ಗೌರವಾದರಗಳು ಇಂಗ್ಲಿಷ್ ಸಾಮ್ರಾಜ್ಯಕ್ಕೂ ಸಲ್ಲಲಿ....ತನ್ನ ಸ್ನೇಹದಲ್ಲಿ ಪ್ರಾಮಾಣಿಕತೆ, ಕಾರ್ಯಗಳಲ್ಲಿ ನಿಷ್ಠೆ ಮತ್ತು ಉಪಕಾರ ಪ್ರವೃತ್ತಿಗಳಿಂದ, ಎಲ್ಲಾ ದೇಶಗಳಿಗಿಂತ ಇದು ಹೆಸರುವಾಸಿಯಾಗಿದೆ. ಬ್ರಿಟಿಷರ ಮನೋಭಿಪ್ರಾಯಗಳು ನೇರವಾಗಿದ್ದು, ಭಗವಂತನಿಂದ ನಿಯಂತ್ರಿಸಲ್ಪಡುತ್ತವೆ ಹಾಗೂ ಅವರ ಪ್ರಯತ್ನಗಳು ಪ್ರಾಪಂಚಿಕ ಸುಖಕ್ಕಾಗಿ ಮತ್ತು ಮಾನವ ಕುಲದ ಉಪಯೋಗಕ್ಕಾಗಿ ಮಾತ್ರ ನಡೆಸಲಾಗುತ್ತವೆ...."ಇತ್ಯಾದಿ.

(ಇದರ ಮೂಲ ದಾಖಲೆ ಪರ್ಶಿಯನ್ ಭಾಷೆಯಲ್ಲಿದ್ದು, ಯಾರಿಂದಲೋ ತರ್ಜುಮೆ ಮಾಡಲಾಗಿದ್ದು ಪೂರ್ಣಯ್ಯನವರ ಹೆಸರಿಗೆ ಆರೋಪಿಸಲಾಗಿದೆ).

ಇದೇ ರೀತಿಯ ಮತ್ತೊಂದು ಘಟನೆ ಇದೇ ವರ್ಷ ಅಂದರೆ ಕ್ರಿ. ಶ. ೧೮೦೨ ರಲ್ಲಿ ಮುಂಬೈಯಲ್ಲಿ ನಡೆಯಿತು. ಮತ್ತೊಬ್ಬ ಪರ್ಶಿಯಾದ ರಾಯಭಾರಿ (ಮುಂಬೈಗೆ ಹೊರಟವ?) ಸಾರ್ವಜನಿಕ ರಸ್ತೆಯಲ್ಲಿ ಸಿಪಾಯಿಯೊಬ್ಬನ ಗುಂಡಿಗೆ ಬಲಿಯಾದ.

ಜಾನ್ ಮಾಲ್ಕಂ ಎಂಬುವಾತ ತನ್ನ ಜೀವನ ಚರಿತ್ರೆಯಲ್ಲಿ ಈ ಘಟನೆಯ ಬಗ್ಗೆ ಈ ರೀತಿ ಅಭಿಪ್ರಾಯ ಪಡುತ್ತಾನೆ:

"ಇಂತಹ ಪ್ರಸಂಗಗಳನ್ನು ಆ ಕಾಲದಲ್ಲಿ ಸುಲಭವಾಗಿ ಪರಿಹರಿಸುತ್ತಿದ್ದರು. ಅದೆಂದರೆ ಕಾಣಿಕೆಗಳ ರೂಪದಲ್ಲಿ ಒಂದು ಲಕ್ಷ; ಪಿಂಚಣಿಯಾಗಿ ೫೦,೦೦೦ ರೂ; ಮತ್ತು ದೇಹವನ್ನು ಯುದ್ಧ ನೌಕೆಯಲ್ಲಿ ಕೆಬ್ಬಾಲಾಕ್ಕೆ ರವಾನೆ ವೆಚ್ಚಗಳು ಸೇರಿದ್ದವು. ಶಿರಾಜ್ ಬಜಾರ್‌ನಲ್ಲಿ ಕೇಳಿ ಬಂದ ನಂತರದ ಮಾತೆಂದರೆ, ಇದೇ ರೀತಿ ಹಣ ಸಂದಾಯವಾದಲ್ಲಿ ನಾವು ಹತ್ತು ರಾಯಭಾರಿಗಳನ್ನು ಇಟ್ಟುಕೊಳ್ಳಬಹುದು !"

(ಅನು : ಟಿ. ಜಿ. ನರಸಿಂಹಮೂರ್ತಿ)